# ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 332 (206)
2. ಸದಸ್ಯರ ಹೆಸರು : ಶ್ರೀ ಎಸ್.ಕೆ ರುದ್ರೇಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 18.07.2019
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಶಿವಮೊಗ್ಗದಿಂದ ಸಾಗರ ರಸ್ತೆ ಮಾರ್ಗದ ಹೊರವಲಯದಲ್ಲಿ 2012ರಲ್ಲಿಯೇ ಸ್ಥಾಪಿತವಾಗಿರುವ ದೇವಕಾತಿಕೊಪ್ಪ ಕೈಗಾರಿಕಾ ವಸಾಹತು ಪ್ರದೇಶದಲ್ಲಿ ಈವರೆಗೆ ಯಾವುದೇ ಕೈಗಾರಿಕೆಗಳು ಸ್ಥಾಪನೆಯಾಗಿರುವುದಿಲ್ಲವೇಕೆ; (ಈ ಬಗ್ಗೆ ಮಾಹಿತಿ ನೀಡುವುದು) | ದೇವಕಾತಿಕೊಪ್ಪ ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲು 255-55 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಂಡು, ದಿನಾಂಕ: 05.05.2012ರಂದು ಮಂಡಳಿಗೆ ಹಸ್ತಾಂತರವಾಗಿರುತ್ತದೆ.<br><br>ಈ ಜಮೀನನ್ನು ಮೂಲಭೂತ ಸೌಕರ್ಯಗಳೊಂದಿಗೆ ಅಭಿವೃದ್ಧಿಪಡಿಸಲು 2016ನೇ ಸಾಲಿನಲ್ಲಿ ಕಾಮಗರಿಗಳನ್ನು ಕೈಗೆತ್ತಿಕೊಂಡಿದ್ದು, ರಸ್ತೆ, ಒಳಚರಂಡಿ, ನೀರಿನ ಸಂಪರ್ಕ ಮತ್ತು ಇತರೆ ಕಾಮಗಾರಿಗಳನ್ನು ಫೆಬ್ರವರಿ-2017ನೇ ಸಾಲಿನಲ್ಲಿ ಪೂರ್ಣಗೊಳಿಸಲಾಗಿದೆ. ವಿದ್ಯುತ್ ಕಾಮಗಾರಿಗಳಾದ ವಿದ್ಯುತ್ ಲೈನ್, ಟಿ.ಸಿ. ಎರಕ್ಷನ್, ಸ್ಟ್ರೀಟ್ ಲೈಟ್ ಮತ್ತು ಎಕ್ಸ್‌ಪ್ರೆಸ್ ಫೀಡರ್ ಲೈನ್ (ಅಂಕೋಲಾ ಸಬ್-ಸ್ಟೇಷನ್‌ನಿಂದ ಕೈಗಾರಿಕಾ ಪ್ರದೇಶಕ್ಕೆ) ಕಾಮಗಾರಿಗಳನ್ನು ಸೆಪ್ಟೆಂಬರ್-2019ರ ಒಳಗಾಗಿ ಪೂರ್ಣಗೊಳಿಸಲಾಗುವುದು.<br><br>ದೇವಕಾತಿಕೊಪ್ಪ ಕೈಗಾರಿಕಾ ಪ್ರದೇಶದ 108-15 ಎಕರೆ ಜಮೀನನ್ನು ನಿವೇಶನಗಳನ್ನಾಗಿ ವಿಂಗಡಿಸಿ, ಆಟೋ ಕಾಂಪ್ಲೆಕ್ಸ್‌ಗೆ 3-90 ಎಕರೆ ಮತ್ತು ಸಾಮಾನ್ಯ ಘಟಕಗಳಿಗೆ 71-85 ಎಕರೆ ಜಮೀನನ್ನು ಹಂಚಿಕೆ ಮಾಡಲಾಗಿದೆ ಹಾಗೂ 32-40 ಎಕರೆ ಜಮೀನು ಹಂಚಿಕೆಗೆ ಲಭ್ಯವಿರುತ್ತದೆ.<br><br>ಮುಂದುವರೆದು, ಈ ಕೈಗಾರಿಕಾ ಪ್ರದೇಶಕ್ಕೆ ಪರಿಸರ ವಿಮೋಚನಾ ಪತ್ರ ತೆಗೆದುಕೊಳ್ಳುವ ಪ್ರಕ್ರಿಯೆ ಮುಂದುವರೆದಿದ್ದು, ವಿದ್ಯುತ್ ಕಾಮಗಾರಿಗಳು ಮತ್ತು ಪರಿಸರ ವಿಮೋಚನಾ ಪತ್ರ ಪಡೆದ ನಂತರ ಹಂಚಿಕೆದಾರರಿಗೆ ಕಟ್ಟಡಗಳನ್ನು ಕಟ್ಟಲು ಮತ್ತು ಅವರುಗಳ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುವು ಮಾಡಿಕೊಡಲಾಗುವುದು. |

....2

| | | |
|---|---|---|
| ಆ. | ಯಾವ ಕಾರಣಕ್ಕಾಗಿ ಕೈಗಾರಿಕೆ ವಸಾಹತುವಿನಲ್ಲಿ ಕೈಗಾರಿಕೆಗಳು ಸ್ಥಾಪನೆಯಾಗಿರುವುದಿಲ್ಲ? | ದೇವಕಾತಿಕೊಪ್ಪ ಕೈಗಾರಿಕಾ ಪ್ರದೇಶದಲ್ಲಿ ಮೂಲಭೂತ ಸೌಕರ್ಯಗಳಾದ ರಸ್ತೆ, ಚರಂಡಿ. ನೀರಿನ ಸಂಪರ್ಕ ಪೂರ್ಣಗೊಳಿಸಲಾಗಿದ್ದು. ವಿದ್ಯುತ್ ಕಾಮಗಾರಿ ಮತ್ತು ಪರಿಸರ ವಿಮೋಚನಾ ಪತ್ರ ಪಡೆದ. ನಂತರ ಕೈಗಾರಿಕೆಗಳನ್ನು ಸ್ಥಾಪಿಸಿ. ಹಂಚಿಕೆದಾರರ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುವು ಮಾಡಿಕೊಡಲಾಗುವುದು. |

ಸಂಖ್ಯೆ: ಸಿಐ 30 ಐಎಪಿ(ಇ) 2018

(ಕೆ.ಜೆ. ಜಾರ್ಜ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಸಚಿವರು